ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಸಕಾಲದಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿನ ಸೇವೆಗಳ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಹಾಗೂ ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

383 (552+557) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) Karnataka Gurantee of Service to Citizen Act, 2011 ಸಕಾಲದಲ್ಲಿ ಸರ್ಕಾರ ಇದುವರೆವಿಗೂ ವಿವಿಧ ಇಲಾಖೆಗಳಲ್ಲಿ ಎಷ್ಟು ಸೇವೆಗಳನ್ನು ನಾಗರಿಕರಿಗೆ ನೀಡಲು ಗುರುತಿಸಲಾಗಿದೆ ;

(ಆ) ಈ ಸೇವೆಗಳನ್ನು ಆಯಾ ಇಲಾಖೆಯ ಮುಖೇನ ಒದಗಿಸಲಾಗುತ್ತಿದೆಯೇ ; ಅಥವಾ ಹೊರಗುತ್ತಿಗೆ ಆಧಾರದ ಮೇಲೆ ನೀಡಲಾಗುತ್ತಿದೆಯೇ ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ನಾಗರಿಕ ಸೇವೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಪೂರೈಸಲು ಅಗತ್ಯವಿರುವ ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್‌ಗಳನ್ನು ನೀಡಲಾಗಿದೆಯೇ ;

(ಈ) ಈ ಸೇವೆಗಳಲ್ಲಿ ನಿರತವಾಗಿರುವ ಸಿಬ್ಬಂದಿ ವರ್ಗಕ್ಕೆ ಸೂಕ್ತ ತರಬೇತಿ ನೀಡಲಾಗಿದೆಯೇ ; ಹಾಗಿದ್ದಲ್ಲಿ, ಈ ತರಬೇತಿಯನ್ನು ನೀಡುವ ಸರ್ಕಾರ ಮತ್ತು ಸರ್ಕಾರೇತರ ಸಂಘಗಳು ಯಾವುವು; (ವಿವರ ನೀಡುವುದು)

(ಉ) ಸಕಾಲದಲ್ಲಿ ಕಳೆದ 2 ವರ್ಷಗಳಲ್ಲಿ ಇಲಾಖಾವಾರು ಸ್ವೀಕೃತವಾದ ಅರ್ಜಿಗಳೆಷ್ಟು ; ಅವುಗಳ ವಿಲೇವಾರಿ ಮತ್ತು ಬಾಕಿ ಇರುವ ಅರ್ಜಿಗಳ ಮಾಹಿತಿ ಒದಗಿಸುವುದು ;

(ಊ) ನಾಗರಿಕ ಸೇವೆಗಳ ಪೂರೈಕೆಯಲ್ಲಿ ನ್ಯೂನತೆಗಳ ಆಧಾರದ ಮೇಲೆ ಎಷ್ಟು ಅಫೀಲುಗಳು ಮೊದಲನೇ ಮತ್ತು ಎರಡನೇ ಹಂತದ ಪ್ರಾಧಿಕಾರದಲ್ಲಿ ದಾಖಲಾಗಿವೆ ; (ಮಾಹಿತಿ ನೀಡುವುದು)

(ಋ) ಈ ದಾಖಲಾಗಿರುವ ಅಫೀಲುಗಳಲ್ಲಿ ಮಂಡ್ಯ ಜಿಲ್ಲೆ ವ್ಯಾಪ್ತಿಯ ಇಲಾಖಾವಾರು ಮಾಹಿತಿ ನೀಡುವುದು ?